# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 585

ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 24-09-2020

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 6ನೇ ವೇತನ ಆಯೋಗದ ವರದಿಯನ್ನು ಜಾರಿಗೆ ತಂದಿದ್ದರೂ ರಾಜ್ಯ ಮತ್ತು ಕೇಂದ್ರ ಸರ್ಕಾರಿ ನೌಕರರುಗಳ ವೇತನದಲ್ಲಿ ತಾರತಮ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ದೇಶದಲ್ಲಿ ಹಲವು ರಾಜ್ಯಗಳು ಅಲ್ಲಿನ ನೌಕರರುಗಳಿಗೆ ಕೇಂದ್ರ ಸರ್ಕಾರದ ಸರ್ಕಾರಿ ನೌಕರರಿಗೆ ಸಮನಾಂತರವಾಗಿ ವೇತನ / ಪಿಂಚಣಿ ಸೌಲಭ್ಯವನ್ನು ನೀಡುತ್ತಿದ್ದು, ರಾಜ್ಯದಲ್ಲಿ ಸದರಿ ಸೌಲಭ್ಯವನ್ನು ಜಾರಿಗೆ ತರದಿರಲು ಕಾರಣವೇನು; | ರಾಜ್ಯ ಸರ್ಕಾರವು ಸಾಂಪ್ರದಾಯಿಕವಾಗಿ ಕೇಂದ್ರ ವೇತನ ಆಯೋಗಗಳ ಶಿಫಾರಸ್ಸು ಹಾಗೂ ಕೇಂದ್ರ ವೇತನ ಪರಿಷ್ಕರಣೆಯ ಅವಧಿಯನ್ನು ಅನುಸರಿಸದೇ ತನ್ನದೇ ಆದ ವೇತನ ಆಯೋಗಗಳ / ವೇತನ ಸಮಿತಿಗಳ ಶಿಫಾರಸ್ಸಿನ ಮೇರೆಗೆ ರಾಜ್ಯ ಸರ್ಕಾರಿ ನೌಕರರ ವೇತನ ಮತ್ತು ಭತ್ಯೆಗಳನ್ನು ಕಾಲದಿಂದ ಕಾಲಕ್ಕೆ ಪರಿಷ್ಕರಿಸಿಕೊಂಡು ಬಂದಿರುತ್ತದೆ ಮತ್ತು ರಾಜ್ಯ ಸರ್ಕಾರಿ ನೌಕರರ ವೇತನವನ್ನು ರಾಜ್ಯ ಸರ್ಕಾರದ ನಿಯಮಗಳ ಪ್ರಕಾರ ಪಾವತಿಸಲಾಗುತ್ತಿರುತ್ತದೆ. ಆದುದರಿಂದ, ಕೇಂದ್ರ ಸರ್ಕಾರದ ನಿಯಮಗಳು ಮತ್ತು ಕೇಂದ್ರ ವೇತನ ಆಯೋಗದ ಶಿಫಾರಸ್ಸುಗಳು ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುವುದಿಲ್ಲ. |
| ಇ) | ರಾಜ್ಯದ ಸರ್ಕಾರಿ ನೌಕರರಿಗೆ ಕೇಂದ್ರ ಸರ್ಕಾರಿ ನೌಕರರಿಗೆ ನೀಡುತ್ತಿರುವ ಕೇಂದ್ರದ 7ನೇ ವೇತನ ಆಯೋಗದ ಶಿಫಾರಸ್ಸುಗಳನ್ನು ಜಾರಿಗೆ ತರಲು ಯಾವ ಕ್ರಮ ಕೈಗೊಳ್ಳಲಾಗುವುದು; | ಮೇಲಿನ ಉತ್ತರ (ಆ) ದಿಂದಾಗಿ ಉದ್ಭವಿಸುವುದಿಲ್ಲ. |

| | | |
|---|---|---|
| ಈ) | ಈ ರೀತಿ ವೇತನ ತಾರತಮ್ಯವನ್ನು ನಿವಾರಿಸುವುದರಿಂದ ಆಡಳಿತದಲ್ಲಿ ದಕ್ಷತೆಯನ್ನು ಹೆಚ್ಚಿಸಿ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಬಹುದಲ್ಲವೇ; | ಮೇಲಿನ ಉತ್ತರ (ಆ) ದಿಂದಾಗಿ ಉದ್ಭವಿಸುವುದಿಲ್ಲ. |
| ಉ) | ಕರ್ನಾಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಈಗಾಗಲೇ 7ನೇ ವೇತನ ಆಯೋಗದ ಶಿಫಾರಸ್ಸಿನಡಿಯಲ್ಲಿ ಸಂಬಳ ಸೌಲಭ್ಯವನ್ನು ನೀಡುತ್ತಿರುವುದರಿಂದ ಅವರ ಕೈಕೆಳಗೆ ಹೆಚ್ಚಿನ ಜವಾಬ್ದಾರಿಯಿಂದ ಕಾರ್ಯನಿರ್ವಹಿಸುತ್ತಿರುವ ರಾಜ್ಯ ಸರ್ಕಾರಿ ನೌಕರರುಗಳಿಗೆ ಈ ತಾರತಮ್ಯದಿಂದ ಅನ್ಯಾಯವಾಗುವುದಿಲ್ಲವೇ; | ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಕೇಂದ್ರ ಸರ್ಕಾರದ ವೇತನ ನಿಯಮಗಳ ಪ್ರಕಾರ ವೇತನ ಮತ್ತು ಭತ್ಯೆಗಳನ್ನು ಹಾಗೂ ರಾಜ್ಯ ಸರ್ಕಾರಿ ನೌಕರರಿಗೆ ರಾಜ್ಯ ವೇತನ ನಿಯಮಗಳ ಪ್ರಕಾರ ವೇತನ ಮತ್ತು ಭತ್ಯೆಗಳನ್ನು ಪಾವತಿಸಲಾಗುತ್ತಿರುತ್ತದೆ. ಆದುದರಿಂದ, ಅಖಿಲ ಭಾರತ ಸೇವೆಯ ಅಧಿಕಾರಿಗಳ ಮತ್ತು ರಾಜ್ಯ ಸರ್ಕಾರಿ ನೌಕರರ ವೇತನವನ್ನು ಹೋಲಿಸಲು ಬರುವುದಿಲ್ಲ. |
| ಊ) | ಈ ಅನ್ಯಾಯವನ್ನು ಯಾವಾಗ ಸರಿಪಡಿಸಲಾಗುವುದು? | ಮೇಲಿನ (ಆ) ಮತ್ತು (ಉ) ಉತ್ತರದಿಂದ ಇದಕ್ಕೆ ಉತ್ತರಿಸುವ ಪ್ರಮೇಯ ಉದ್ಭವಿಸುವುದಿಲ್ಲ. |

ಸಂ: ಆಇ 17 ಎಸ್‌ಆರ್‌ಪಿ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ.